## ಕರ್ನಾಟಕ ವಿಧಾನ ಪರಿಷತ್ತು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಬಿ.ಜಿ ಪಾಟೀಲ್**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1017**

**ಉತ್ತರಿಸಬೇಕಾದ ದಿನಾಂಕ : 21.09.2021**

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಸಹಕಾರಿ ಕ್ಷೇತ್ರದಲ್ಲಿ ರೈತರಿಗಾಗಿ ಇರುವ ಸಾಲ ಯೋಜನೆಗಳು ಯಾವುವು; ಯಾವ ಯಾವ ಸಾಲಗಳು ಸಹಾಯಧನದಡಿ ಬರುತ್ತವೆ; (ವಿವರ ನೀಡುವುದು) | ಕಲಬುರಗಿ ಮತ್ತು ಯಾದಗಿರಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನಲ್ಲಿ ರೈತರಿಗೆ ಹೈನುಗಾರಿಕೆಗಾಗಿ ರೂ.2.00 ಲಕ್ಷಗಳವರೆಗೆ ಹಾಗೂ ಅಲ್ಪಾವಧಿ ಬೆಳೆ ಸಾಲ ರೂ.3.00 ಲಕ್ಷದವರೆಗೆ ಶೂನ್ಯ ಬಡ್ಡಿದರದಲ್ಲಿ ಸಾಲ ವಿತರಿಸಲಾಗುತ್ತಿದೆ.<br>ಮಧ್ಯಮಾವಧಿ ಕೃಷಿ ಸಾಲವನ್ನು ರೂ.10.00 ಲಕ್ಷದವರೆಗೆ ಶೇ.3 ರ ಬಡ್ಡಿ ದರದಲ್ಲಿ ನೀಡುವ ಯೋಜನೆಗಳಿದ್ದು, ಈ ಯೋಜನೆಗಳಲ್ಲಿ ನೀಡಿದ ಸಾಲವು ನಿಗದಿತ ಅವಧಿಯೊಳಗೆ ವಸೂಲಾದರೆ ಸರ್ಕಾರದ ಬಡ್ಡಿ ಸಹಾಯಧನ ದೊರಕುತ್ತದೆ. |
| ಆ) | ಮೇಲ್ಕಂಡ ಜಿಲ್ಲೆಗಳಲ್ಲಿ ಎಷ್ಟು ಜನ ರೈತರುಗಳು ಈ ರೀತಿಯ ಸಾಲವನ್ನು ಪಡೆದಿರುತ್ತಾರೆ; (ವಿವರ ನೀಡುವುದು) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಸಾಲ ಪಡೆದ ರೈತರ ವಿವರ ಈ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ) |
| ಇ) | ವಾಹನ ಕೊಳ್ಳಲು ರೈತರಿಗೆ ಸಾಲ ಮತ್ತು ಸಬ್ಸಿಡಿಯನ್ನೂ ನೀಡಲಾಗುತ್ತಿದೆಯೇ? (ವಿವರ ನೀಡುವುದು) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಶೇ.3 ರ ಬಡ್ಡಿದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆಯಲ್ಲಿ ಕೃಷಿ ಯಂತ್ರೋಪಕರಣಗಳಡಿ ಟ್ರ್ಯಾಕ್ಟರ್ ಹಾಗೂ ಪವರ ಟಿಲ್ಲರ್ ಕೊಳ್ಳಲು ಬಡ್ಡಿಸಹಾಯಧನ ಲಭ್ಯವಿದ್ದು, ಇತರೆ ವಾಹನಗಳಿಗೆ ಲಭ್ಯವಿರುವುದಿಲ್ಲ.<br>ಈ ಹಿಂದೆ ವಿತರಿಸಿದ ಟ್ರ್ಯಾಕ್ಟರ್ ಸಾಲ ರೂ.602.98 ಲಕ್ಷದಷ್ಟು ಸುಸ್ತಿಯಾಗಿರುವುದರಿಂದ ಹಾಗೂ ಬ್ಯಾಂಕಿನಲ್ಲಿ ಪ್ರಸ್ತುತ ಬಂಡವಾಳದ ಕೊರತೆ ಇರುವುದರಿಂದ ವಾಹನಕೊಳ್ಳಲು ರೈತರಿಗೆ ಸಾಲ ವಿತರಿಸಿರುವುದಿಲ್ಲ. |

| ಕ್ರ ಸಂ | ಜಿಲ್ಲೆಯ ಹೆಸರು | ದಿ.01-04-2020 ರಿಂದ 31-03-2021 ರ ಅವಧಿಯಲ್ಲಿ ಸಾಲ ಪಡೆದ ರೈತರ ಸಂಖ್ಯೆ | |
|---|---|---|---|
| | | ಅಲ್ಪಾವಧಿ ಕೃಷಿ ಸಾಲ | ಮಧ್ಯಮಾವಧಿ & ದೀರ್ಘಾವಧಿ ಕೃಷಿ ಸಾಲ |
| 1 | ಕಲಬುರಗಿ | 53,984 | 0 |
| 2 | ಯಾದಗಿರಿ | 28,251 | 0 |

**ಸಂಖ್ಯೆ: ಸಿಒ 270 ಸಿಎಲ್‌ಎಸ್ 2021**

(ಎಸ್.ಟಿ ಸೋಮಶೇಖರ್)
ಸಹಕಾರ ಸಚಿವರು